# ಕರ್ನಾಟಕ ವಿಧಾನ ಪರಿಷತ್ತು

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1939

2) ಸದಸ್ಯರ ಹೆಸರು : ಶ್ರೀ ಪ್ರಕಾಶ್ ಕೆ. ರಾಥೋಡ್ (ನಾಮನಿರ್ದೇಶನ ಹೊಂದಿದವರು)

3) ಉತ್ತರಿಸಬೇಕಾದ ದಿನಾಂಕ : 16-03-2022

4) ಉತ್ತರಿಸಬೇಕಾದ ಸಚಿವರು : ಮೀನುಗಾರಿಕೆ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| ಅ) | ವಿಜಯಪುರ ಜಿಲ್ಲೆಯಲ್ಲಿ 2021-22ನೇ ಸಾಲಿನಲ್ಲಿ ಎಷ್ಟು ಕೆರೆ ಗಳಲ್ಲಿ ಮೀನುಗಾರಿಕೆ ಮಾಡಲು ಬಿತ್ತನೆ ಮೀನುಮರಿಗಳನ್ನು ನೀಡಲಾಗಿದೆ; | ವಿಜಯಪುರ ಜಿಲ್ಲೆಯಲ್ಲಿ ಇಲಾಖಾ ವ್ಯಾಪ್ತಿಯ 137 ಕೆರೆಗಳಲ್ಲಿ 63.54 ಲಕ್ಷ ಮೀನುಮರಿಗಳನ್ನು ನೇರ ಗುತ್ತಿಗೆ ಹಾಗೂ ಹರಾಜು ಮೂಲಕ ಜಲಸಂಪನ್ಮೂಲಗಳನ್ನು ಪಡೆದ ಬಿಡ್ ದಾರರು ಬಿತ್ತನೆ ಮಾಡಿರುತ್ತಾರೆ. ಇದರ ಜೊತೆಗೆ ಒಳನಾಡು ಮೀನು ಕೃಷಿಗೆ ಪ್ರೋತ್ಸಾಹ ಯೋಜನೆಯಡಿ ವಿಜಯಪುರ ಜಿಲ್ಲೆಯಲ್ಲಿ ನೇರ ಗುತ್ತಿಗೆ ಮೂಲಕ ಮೀನುಗಾರಿಕೆ ಸಹಕಾರಿ ಸಂಘಗಳು ಪಡೆದ 16 ಕೆರೆಗಳಲ್ಲಿ 11.24 ಲಕ್ಷ ಬಲಿತ ಬಿತ್ತನೆ ಮೀನುಮರಿಗಳನ್ನು ಬಿತ್ತನೆ ಮಾಡಲಾಗಿದೆ. |
| ಆ) | ಸದರಿ ಜಿಲ್ಲೆಯಲ್ಲಿ 250ಕ್ಕೂ ಹೆಚ್ಚು ಕೆರೆಗಳಿದ್ದು, ಇವುಗಳಲ್ಲಿ ಕೇವಲ 13 ಕೆರೆಗಳಲ್ಲಿ ಮೀನುಗಳ ಉತ್ಪಾದನೆ ಕೈಗೊಂಡಿದ್ದು, ಉಳಿದ ಕೆರೆಗಳಲ್ಲಿ ಮೀನುಗಾರಿಕೆಗೆ ಅನುಕೂಲ ಮಾಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ವಿಜಯಪುರ ಜಿಲ್ಲೆಯಲ್ಲಿ 160 ಇಲಾಖಾ ವ್ಯಾಪ್ತಿಯ ಕೆರೆಗಳಿದ್ದು, ಅವುಗಳಲ್ಲಿ 137 ಕೆರೆಗಳ ಮೀನು ಪಾಶುವಾರು ಹಕ್ಕನ್ನು ವಿಲೇವಾರಿ ಮಾಡಲಾಗಿದೆ. ಕೆರೆಗಳನ್ನು ಪಡೆದ ಬಿಡ್ ದಾರರು ಮೀನುಮರಿಗಳನ್ನು ದಾಸ್ತಾನು ಮಾಡಿ ಮೀನು ಕೃಷಿಯನ್ನು ಕೈಗೊಂಡು ಮೀನುಗಾರಿಕೆ ಮಾಡುತ್ತಿರುತ್ತಾರೆ. ಉಳಿದ ಕೆರೆಗಳಲ್ಲಿ ಮೀನು ಸಾಕಾಣಿಕೆಗೆ (ಶೇ.50) ನೀರು ಸಂಗ್ರಹಣೆಯಾದ ತಕ್ಷಣವೇ ಈ ಕೆರೆಗಳ ಮೀನು ಪಾಶುವಾರು ಹಕ್ಕನ್ನು ನಿಯಮಾನುಸಾರ ವಿಲೇ ಮಾಡಲು ಕ್ರಮವಹಿಸಲಾಗುವುದು. |
| ಇ) | ಈ ಎಲ್ಲಾ ಕೆರೆಗಳಲ್ಲಿ ಮೀನುಗಾರಿಕೆ ಮಾಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? | ಕೆರೆಗಳಲ್ಲಿ ಮೀನುಗಾರಿಕೆ ಮಾಡಲು ಇಲಾಖೆಯಿಂದ ಹಮ್ಮಿಕೊಂಡಿರುವ ಕಾರ್ಯಕ್ರಮಗಳ ವಿವರಗಳನ್ನು **ಅನುಬಂಧ-1** ರಲ್ಲಿ ನೀಡಲಾಗಿದೆ. |

ಸಂಖ್ಯೆ: ಪಸಂಮೀ ಇ-77 ಮೀಇಯೋ 2022

(ಎಸ್. ಅಂಗಾರ)

ಮೀನುಗಾರಿಕೆ, ಬಂದರು ಮತ್ತು
ಒಳನಾಡು ಜಲಸಾರಿಗೆ ಸಚಿವರು

**ಮಾನ್ಯ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಪ್ರಕಾಶ್ ಕೆ. ರಾಥೋಡ್ (ನಾಮನಿರ್ದೇಶನ ಹೊಂದಿದವರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 1939 ಕ್ಕೆ**

**ಅನುಬಂಧ-1**

**ಕೆರೆಗಳಲ್ಲಿ ಮೀನುಗಾರಿಕೆ ಮಾಡಲು ಇಲಾಖೆಯಿಂದ ಹಮ್ಮಿಕೊಂಡಿರುವ ಕಾರ್ಯಕ್ರಮಗಳ ವಿವರ**

1) 40 ಹೆಕ್ಟೇರ್‌ಗಿಂತ ಹೆಚ್ಚು ಅಚ್ಚುಕಟ್ಟು ಹೊಂದಿರುವ ಕೆರೆಗಳ ಮೀನು ಪಾಶುವಾರು ಹಕ್ಕಿನ ವಿಲೇವಾರಿಯು ಮೀನುಗಾರಿಕೆ ಇಲಾಖೆ ವ್ಯಾಪ್ತಿಗೆ ಹಾಗೂ 40 ಹೆಕ್ಟೇರ್‌ಗಿಂತ ಕಡಿಮೆ ಅಚ್ಚುಕಟ್ಟು ಹೊಂದಿರುವ ಕೆರೆಗಳ (ಪಟ್ಟಣ ಪಂಚಾಯಿತಿ/ ಪುರಸಭೆ/ ನಗರ ಸಭೆ/ ಮಹಾನಗರ ಪಾಲಿಕೆ/ ಬಿ.ಬಿ.ಎಂ.ಪಿ ವ್ಯಾಪ್ತಿ ಹೊರತು ಪಡಿಸಿ) ಮೀನು ಪಾಶುವಾರು ಹಕ್ಕಿನ ವಿಲೇವಾರಿಯು ಸಂಬಂಧಪಟ್ಟ ಗ್ರಾಮ ಪಂಚಾಯಿತಿಗಳಿಗೆ ಒಳಪಟ್ಟಿರುತ್ತದೆ. ಅರ್ಹ ಮೀನುಗಾರರ ಸಹಕಾರ ಸಂಘಗಳು ನೇರ ಗುತ್ತಿಗೆ ಮುಖಾಂತರ ಇಲಾಖಾ ವ್ಯಾಪ್ತಿಯ ಜಲಸಂಪನ್ಮೂಲಗಳ ಮೀನು ಪಾಶುವಾರು ಹಕ್ಕನ್ನು ಗುತ್ತಿಗೆ ಕಾರ್ಯನೀತಿ-2014 ರನ್ವಯ ಗುತ್ತಿಗೆ ಮೊತ್ತ ಪಾವತಿಸಿ. 5 ವರ್ಷಗಳ ಅವಧಿಗೆ ಗುತ್ತಿಗೆಗೆ ಪಡೆದುಕೊಳ್ಳಲು ಅವಕಾಶವಿರುತ್ತದೆ. ಗುತ್ತಿಗೆಗೆ ವಿಲೇವಾರಿ ಮಾಡಲಾದ ನಂತರ ಬಾಕಿ ಉಳಿಯುವ ಜಲಸಂಪನ್ಮೂಲಗಳ ಮೀನು ಪಾಶುವಾರು ಹಕ್ಕನ್ನು ಟೆಂಡರ್-ಕಂ-ಹರಾಜು ಮುಖಾಂತರ ವಿಲೇವಾರಿ ಮಾಡಲಾಗುತ್ತದೆ.

2) "ಒಳನಾಡು ಮೀನು ಕೃಷಿಗೆ ಪ್ರೋತ್ಸಾಹ"ಯೋಜನೆಯಡಿ ಪ್ರತಿ ಹೆಕ್ಟೇರ್ ಉಪಯುಕ್ತತಾ ಜಲವಿಸ್ತೀರ್ಣಕ್ಕೆ 2000 ಬಲಿತ ಬಿತ್ತನೆ ಮೀನು ಮರಿಗಳನ್ನು ಮೀನುಗಾರರ ಸಹಕಾರ ಸಂಘಗಳ ಬಲಪಡಿಸುವ ಉದ್ದೇಶದಿಂದ ಸಂಘಗಳ ಮುಖಾಂತರ ಉಚಿತವಾಗಿ ಬಿತ್ತನೆ ಮಾಡಿ ಒಳನಾಡು ಮೀನು ಉತ್ಪಾದನೆಯನ್ನು ಹೆಚ್ಚಿಸಲಾಗುತ್ತಿದೆ.

3) ಕೆರೆ/ಜಲಾಶಯಗಳ ಅಂಚಿನಲ್ಲಿ ನಿರ್ಮಿಸಿದ ಕೊಳಗಳಲ್ಲಿ ಮೀನುಮರಿ ಪಾಲನೆ ಮಾಡಲು ಪ್ರತಿ ಹೆಕ್ಟೇರ್ ಗೆ ರೂ.2.50 ಲಕ್ಷ ಸಹಾಯಧನ ನೀಡಿ ಪ್ರೋತ್ಸಾಹಿಸಲಾಗುತ್ತಿದೆ.

4) ಸರ್ಕಾರಿ ಸ್ವಾಮ್ಯದ ಮೀನುಮರಿ ಉತ್ಪಾದನಾ ಮತ್ತು ಪಾಲನಾ ಕೇಂದ್ರಗಳಿಂದ ಖರೀದಿಸಿದ ಎಲ್ಲಾ ತಳಿಗಳ ಮೀನುಮರಿ ಬೆಲೆಯ ಶೇ.50 ರಷ್ಟು ಅಂದರೆ ವ್ಯಕ್ತಿಗತ ಗರಿಷ್ಠ ರೂ.5,000/- ಹಾಗೂ ಸಂಘ ಸಂಸ್ಥೆಗಳಿಗೆ ಗರಿಷ್ಠ ರೂ.20,000/- ಗಳ ಮಿತಿಗೊಳಪಟ್ಟು ಸಹಾಯಧನವನ್ನು ನೀಡಲಾಗುತ್ತಿದೆ. ಮೀನುಗಾರಿಕೆ ಇಲಾಖೆಯಿಂದ ನೋಂದಾಯಿಸಿಕೊಂಡು ಸ್ವಂತ ಕೊಳಗಳಲ್ಲಿ ಮೀನು ಮರಿ ಪಾಲನೆ ಕೈಗೊಳ್ಳಲು ಮೀನು ಕೃಷಿಕರಿಗೆ ಪ್ರತಿ ಹೆಕ್ಟೇರ್ ಜಲವಿಸ್ತೀರ್ಣಕ್ಕೆ 50 ಲಕ್ಷ ಸ್ಪಾನ್ ಅಥವಾ 10 ಲಕ್ಷ ಫ್ರೈ ಖರೀದಿಸಲು ಶೇ.50 ರಷ್ಟು ಗರಿಷ್ಠ ರೂ.25,000 ಗಳ ಸಹಾಯಧನ ಪಡೆಯಲು ಅವಕಾಶ ಕಲ್ಪಿಸಲಾಗಿದೆ.

5) ಒಳನಾಡು ಮೀನುಗಾರರಿಗೆ ಮೀನು ಹಿಡಿಯಲು ಸಲಕರಣೆ ಕಿಟ್ ವಿತರಣೆ ಯೋಜನೆಯಡಿ ಸಲಕರಣೆ ಕಿಟ್ ಖರೀದಿಸಲು ಶೇ.100 ರಷ್ಟು ಸಹಾಯಧನ ನೀಡಲಾಗುತ್ತಿದೆ.(ಘಟಕ ವೆಚ್ಚ –ರೂ.10,000/-)

xxxx